# ವೀರ ಪರಂಪರೆಯ ಪ್ರತೀಕವಾದ ವೀರಭದ್ರ ಉಪಾಸನೆ

ಕೆ. ಅಭಿಶಂಕರ್

ಇತ್ತೀಚಿಗೆ ಹೈದರಾಬಾದಿನ ಡಾ|| ಕೆ. ಸರೋಜಿನಿ ದೇವಿ ಅವರ ಒಂದು ಲೇಖನವು Quarteily Journal of the Mythic Societyಯಲ್ಲಿ ಪ್ರಕಟ ವಾಯಿತು. ಅದು ಹಲವು ಲೋಪದೋಷಗಳಿಂದ ಕೂಡಿದೆ. ಈ ವಿಷಯದ ಮೇಲೆ ಬೇರೆ ಒಂದು ವಿಸ್ತೃತ ಅಧ್ಯಯನಕ್ಕೆ ಅವಕಾಶವಿದೆ. ಈ ನಿಬಂಧದಲ್ಲಿ ಸಂಕ್ಷೇಪ ವಾಗಿ ಒಂದು ಪ್ರಮೇಯವೆಂಬಂತೆ ಕೆಲವು ಅಂಶಗಳನ್ನು ಹೇಳಿ, ದಿಕ್‌ಸೂಚಿ ನೀಡಲು ಯತ್ನಿಸಲಾಗಿದೆ.

ವೀರಭದ್ರನು ಒಬ್ಬ ಪರಿವಾರ ದೇವತೆಯಾಗಿ, ದೇವಾಲಯಗಳಲ್ಲಿ ಒಬ್ಬ ಪಾರ್ಶ್ವ ದೇವತೆಯಾಗಿ ಭಾರತದ ಅನೇಕ ಕಡೆಗಳಲ್ಲಿ ಅರ್ಚನೆಗೊಳ್ಳುತ್ತಾನೆ. ಉಗ್ರತೆಯಲ್ಲಿ ವೀರಭದ್ರನನ್ನು ವೈಷ್ಣವ ಸಂಪ್ರದಾಯದ ನರಸಿಂಹನಿಗೆ ಹೋಲಿಸಬಹುದು. ಶೈವಾಗಮಗಳಲ್ಲಿ ವೀರಭದ್ರ ದೇವರಿಗೆ ಒಂದು ಸ್ಥಾನವಿದೆ. ವೀರಭದ್ರಾಗಮವೂ ಇದೆ. ತಮಿಳುನಾಡಿನಲ್ಲಿ ಮುರುಗ ಅಥವಾ ಸ್ಕಂದ ಅಂದರೆ ಸುಬ್ರಹ್ಮಣ್ಯ, ಕೇರಳದಲ್ಲಿ 'ಹರಿಹರ ಪುತ್ರ' ಶಾಸ್ತ (ಅಯ್ಯಪ್ಪ), ಮಹಾರಾಷ್ಟ್ರದಲ್ಲಿ ಖಂಡೋಬ ಹೆಚ್ಚು ಜನಪ್ರಿಯ ಶೈವ ದೇವತೆಗಳು. ಕರ್ನಾಟಕದಲ್ಲಿ ಕಳೆದ ಕೆಲವು ಶತಮಾನಗಳಿಂದ ವೀರ ಯೋಧ ದೇವತೆ (Warrior god) ವೀರಭದ್ರನ (ವೀರೇಶನ) ಉಪಾಸನೆಯ ಪ್ರಾಚುರ್ಯ ಬಹುಮಟ್ಟಿಗೆ ಇದೆ. ಆಂಧ್ರಪ್ರದೇಶದಲ್ಲೂ ಇದು ಕೆಲಮಟ್ಟಿಗೆ ಉಂಟು. ವಿಶೇಷವಾಗಿ ಕರ್ನಾಟಕಕ್ಕೆ ಹತ್ತಿರವಿರುವ ಭಾಗದಲ್ಲಿ (ಉದಾಹರಣೆಗೆ ಲೇಪಾಕ್ಷಿ, ರಾಚೋಟಿ ಮುಂತಾದೆಡೆ) ಈ ಬೆಳವಣಿಗೆ ಕುತೂಹಲಕಾರಿಯಾದ, ಸಂಗತಿಯಾಗಿದೆ. ಕರ್ನಾಟಕದ ಬಹಳಷ್ಟು ಊರುಗಳಲ್ಲಿ ವೀರಭದ್ರ ದೇವರ ಗುಡಿಗಳಿವೆ. ಕೆಲವು ಕಡೆಗಳಲ್ಲಿ ಪ್ರಧಾನ ದೇವತೆಯಾಗಿ ವೀರಭದ್ರನಿಗೇ ಅರ್ಪಿತವಾದ ಪ್ರತ್ಯೇಕ ದೇವಾಲಯಗಳಿವೆ. ವೀರಭದ್ರನು ಹೀಗೆ ಶಿಷ್ಟರಿಗೂ, ಜಾನಪದರಿಗೂ ಕೂಡಿಯೇ ಪ್ರಭಾವಶಾಲಿಯಾದ ದೇವತೆಯಾಗಿದ್ದು ಒಂದು ವೈಶಿಷ್ಟ್ಯ.

ಸ್ಕಂದ, ಕೂರ್ಮ, ಮತ್ಸ್ಯ ಮುಂತಾದ ಪುರಾಣಗಳಲ್ಲಿ ಶೈವಾಗಮಗಳಲ್ಲಿ ವೀರಭದ್ರನ ಆವಿರ್ಭಾವ, ವೀರೋಚಿತ ಕಾರ್ಯ, ಮಹಿಮೆ, ಅರ್ಚನೆ ಇತ್ಯಾದಿ ವಿಷಯಗಳ ನಿರೂಪಣೆ, ಪ್ರಸ್ತಾಪ, ವಿವರಣೆ ಬಂದಿವೆ. ದಕ್ಷಯಜ್ಞದ ಸಂದರ್ಭದಲ್ಲಿ ಶಿವನಿಗೆ ಆದ ಅಪಮಾನ, ಇದರಿಂದ ನೊಂದ ದಾಕ್ಷಾಯಣಿ ತನ್ನನ್ನೇ ಯಾಗಕುಂಡದಲ್ಲಿ ಆಹುತಿ ಮಾಡಿಕೊಂಡದ್ದು, ಶಿವನಿಂದ 'ನಿರ್ಮಾಣ'ನಾದ ವೀರಭದ್ರನಿಂದ ಯಜ್ಞದ ಭಂಗ, ದಕ್ಷನ ಶಿರಚ್ಛೇದನ, ತದನಂತರ ಅವನಿಗೆ ಆಡಿನ ತಲೆಯನ್ನು ಸೇರಿಸಿ ಪುನರುಜ್ಜೀವನ ಮುಂತಾದ ಕೆಲವು ಅತಿಮಾನುಷವೆನಿಸುವ ಘಟನೆಗಳಿಂದ ಕೂಡಿದ ವರ್ಣರಂಜಿತ ಪೌರಾಣಿಕ ಕಥೆಗಳುಂಟು. ಇದು ಪ್ರಾಗೈತಿಹಾಸಿಕ ಕಾಲದಲ್ಲಿ ನಡೆದಿರಬಹುದಾದ ಎರಡು ಸಂಸ್ಕೃತಿಗಳ ನಡುವಣ ಸಂಘರ್ಷಣೆಯ ಒಂದು ಸಂಕೇತವೆಂಬ ಅಭಿಪ್ರಾಯವೂ ಇದೆ. ಡಾ|| ಶ್ರೀ ಜ.ಚ.ನಿ. ಅವರು ಸಿಂಧು ಸಂಸ್ಕೃತಿಯ ಕುರುಹುಗಳ ಮತ್ತು ಪ್ರಾಚೀನ ಗ್ರಂಥಗಳಲ್ಲಿ ದೊರಕುವ ಎಳೆಗಳ ಜಾಡನ್ನು ಹಿಡಿದು, ನಡೆದಿರಬಹುದಾದ ಅಂಥ ಪ್ರಾರಂಭಿಕ ಘಟನೆಗಳನ್ನು ಅವುಗಳ ಪರಿಣಾಮಗಳನ್ನು ಕುರಿತು ವಿಸ್ತೃತವಾಗಿ ಬರೆದಿದ್ದಾರೆ.

ಸಪ್ತಮಾತೃಕೆಯರ ಪಟ್ಟಿಕೆಯಲ್ಲಿ ಮೊದಲು, ಅಕ್ಕಪಕ್ಕದಲ್ಲಿ ಅವರ ಬೆಂಗಾವಲಿಗೆ ಇಬ್ಬರು ಕೇವಲ ಆಯುಧ ಪುರುಷರ ರೂಪವಿರುವುದು ಬೆಳಕಿಗೆ ಬಂದಿದೆ. ಕ್ರಮೇಣ ಈ ರಕ್ಷಣೆಯ ಕಾರ್ಯವನ್ನು ವೀರಭದ್ರನಿಗೆ ಮತ್ತು ಗಣೇಶನಿಗೆ ವಹಿಸಲಾದಂತೆ ತೋರಿಸಲಾಗಿದೆ. ಬಲಗಡೆಗೆ ವೀರೇಶ, ಎಡಗಡೆಗೆ ಗಣಪತಿ ಹೀಗೆ. ಈ ಸಂದರ್ಭದಲ್ಲಿ ವೀರಭದ್ರನು ವೀಣಾಧರನಾದಂತೆ ಕೆಲ ವೆಡೆಗಳಲ್ಲಿ ಕಾಣಿಸಿರುವುದು ಕುತೂಹಲಕಾರಿ ಅಂಶ. ಅಲ್ಲಿ ಅವನು ಸೌಮ್ಯ. ಶಿವನ ಲೀಲೆಗಳಲ್ಲಿ ವೀರಭದ್ರನದು ಒಂದು ಪಾತ್ರ–ಅರ್ಥಾತ್ ವೀರಭದ್ರನು ಶಿವನ ಲೀಲಾ ಮೂರ್ತಿಗಳಲ್ಲಿ ಒಬ್ಬ. ವೀರಭದ್ರನು ಶಿವನದೇ ಒಂದು ರೂಪ, ಭೀಷಣ ರೂಪ ; ಅವನು ದುಷ್ಟನಿಗ್ರಹಿ ; ರುದ್ರ ಗಣಕ್ಕೆ ಸೇರಿದವನೆಂದೂ ಹೇಳಲಾಗಿದೆ. ಸಾವಿರ ತಲೆ, ಸಾವಿರ ಕೈ, ಸಾವಿರ ಕಣ್ಣು, ಬೃಹದಾಕಾರದ ಭುಜಗಳು, ಪ್ರಳಯಕಾಲ ಸ್ವರೂಪ ಮುಂತಾಗಿ ಅವನ ವಿರಾಟರೂಪ ವನ್ನು ಮೂಲತಃ ವರ್ಣಿಸಲಾಗಿದೆ. ಇದು ಒಂದು ರೀತಿಯ 'ವಿಶ್ವರೂಪ' ದರ್ಶನದ ಹಾಗೆ. ಶಿಲ್ಪಗಳಲ್ಲಿ ಸಾಮಾನ್ಯವಾಗಿ ವೀರಭದ್ರನಿಗೆ ನಾಲ್ಕು ಕೈ, ಮೂರು ಕಣ್ಣು (ಮುಕ್ಕಣ್ಣನಂತೆ), ಬಲಗೈಗಳಲ್ಲಿ ಖಡ್ಗ ಮತ್ತು ಬಾಣ, ಎಡಗೈಗಳಲ್ಲಿ ಬಿಲ್ಲು ಮತ್ತು ಗದೆ ಅಥವಾ ಗುರಾಣಿ–ಹೀಗೆ ತೋರಿಸುವುದುಂಟು. (ಭದ್ರಕಾಳಿ ಯನ್ನೂ ಶಸ್ತ್ರಸಜ್ಜಿತಳನ್ನಾಗಿ ರೂಪಿಸುತ್ತಾರೆ). ಕೆಲವು ಕಡೆಗಳಲ್ಲಿ ವೀರಭದ್ರನಿಗೆ ಕೋರೆದಾಡೆಗಳು ಮತ್ತು ಅಥವಾ ರುಂಡಮಾಲೆಗಳು ಇರುತ್ತವೆ. ಸಾಧಾರಣವಾಗಿ ಯಾವಾಗಲೂ ಆಡಿನ ತಲೆಯ ದಕ್ಷನ ಚಿಕ್ಕ ಮೂರ್ತಿ ಅಂಜಲಿ-ಬದ್ಧವಾಗಿ ವೀರಭದ್ರಮೂರ್ತಿಯ ಬಲಭಾಗದಲ್ಲಿ ಕೆಳಗೆ ನಿಂತಿರುತ್ತದೆ. ಇನ್ನೊಂದು ಕಡೆ ಭದ್ರಕಾಳಿಯೂ ನಿಂತಿರುವುದುಂಟು.

**ಪ್ರತಿಭಟನೆಗೆ ಪ್ರೇರಕ** : ಹೊಯ್ಸಳರ ಆಳ್ವಿಕೆಯ ಕೊನೆಯ ಭಾಗದಲ್ಲಿ ವೀರಭದ್ರನ ಉಪಾಸನೆಗೆ ಹೆಚ್ಚು ಪ್ರೋತ್ಸಾಹ ನೀಡಿದ ಉದಾಹರಣೆಗಳು ಕಂಡು ಬಂದಿವೆ. ಹಳೇಬೀಡಿನಲ್ಲಿ ಕೋಟೆಯ ಬಳಿ, ಹೊಯ್ಸಳರ ಕಡೆ ಕಾಲದ ಆರಡಿ ಎತ್ತರದ ವೀರಭದ್ರಮೂರ್ತಿ ಇರುವು ದನ್ನು ಗುರುತಿಸಲಾಗಿದೆ. ಅದರ ಕೈಗಳಲ್ಲಿ ಕತ್ತಿ, ತ್ರಿಶೂಲ, ಡಮರುಗ ಮತ್ತು ಗುರಾಣಿ ಇವೆ. ಇದು ಮೀಸೆಯುಳ್ಳ ಮೂರ್ತಿ. ಆಗಮಗಳಲ್ಲಿ ವೀರಭದ್ರನಿಗೆ ಮೀಸೆ ಇರಲೇ ಬೇಕೆಂದು ಹೇಳಿಲ್ಲವಾದರೂ, ಹಲವೆಡೆಗಳಲ್ಲಿ ಮೀಸೆ ಯನ್ನು ತೋರಿಸುವುದೂ ಪ್ರಚಲಿತವಾಯಿತು. ಮೇಲೆ ಹೇಳಿದ ಮೂರ್ತಿಯಲ್ಲಿ ಸಿಂಹ ಲಲಾಟದ ಬದಲು ರುಂಡ ವುಳ್ಳ ಕೀರ್ತಿಮುಖವಿದೆ. ಈ ಹೊಯ್ಸಳ ಗುಡಿಯಲ್ಲಿ ಕಂಡುಬಂದ ಹೊಯ್ಸಳ ಶಿಲಾಲೇಖನದಲ್ಲಿ ವೀರಭದ್ರ ನನ್ನು ವೀರೇಶ್ವರ, ವೀರಣ್ಣನೆಂದು ಹೆಸರಿಸಲಾಗಿದೆ. ಚಿತ್ರದುರ್ಗದ ಗುಡ್ಡದ ಮೇಲೆ ಸಿದ್ಧೇಶ್ವರ ಗುಡಿಯಲ್ಲಿ ರುವ ಒಂದು ವೀರಭದ್ರಮೂರ್ತಿಯೂ ಹೊಯ್ಸಳರ ಕಾಲದ್ದೆಂದು ಹೇಳಲಾಗಿದೆ.

ದಕ್ಷಿಣ ದೇಶಕ್ಕೆ ಬಂದೊದಗಿದ್ದ ಒಂದು ದೊಡ್ಡ ವಿಪತ್ತಿನ ಕಾಲದಲ್ಲಿ ಈ ಬೆಳವಣಿಗೆಯಾಗುತ್ತಿದ್ದುದನ್ನು ಲಕ್ಷಿಸಬೇಕು. ಕರ್ನಾಟಕದಲ್ಲಿ, ವಿಜಯನಗರ ಮತ್ತು ವಿಜಯನಗರೋತ್ತರ ಕಾಲಗಳಲ್ಲಿ ವೀರಭದ್ರನ ಶಿಲ್ಪಗಳ ಮತ್ತು ಉಪಾಸನೆಯ ಬಾಹುಳ್ಯ ಮತ್ತು ಪ್ರಾಚುರ್ಯ ವಿಶೇಷವಾಗಿರುವುದನ್ನು ಕಾಣುತ್ತೇವೆ. ೧೨ನೆಯ ಶತಮಾನದಲ್ಲಿ ಪ್ರಾರಂಭವಾಗಿ ಪ್ರಸಾರಗೊಂಡ ಶರಣ ಆಂದೋಳನವು ವಿಗ್ರಹ ಪೂಜೆಗೆ ಪ್ರಾಶಸ್ತ್ಯ ಕೊಡದೆ, (ಏಕ ದೇವತಾ) ಶಿವನ (ಅಥವಾ ವಿಶ್ವದ) ಸಂಕೇತವಾದ ಇಷ್ಟಲಿಂಗದ ಅರ್ಚನೆಯ ಮಹತ್ವವನ್ನು ಬೋಧಿಸಿದೆ ಯಾದರೂ, ಪಾಶುಪತ, ಲಕುಲೀಶ, ಕಾಳಾಮುಖ ಮುಂತಾದ ಶೈವ ಪ್ರಭೇದಗಳನ್ನು ಅನುಸರಿಸುತ್ತಿದ್ದ ವರು ಶರಣ ಆಂದೋಳನದ ಬೃಹತ್ ಧಾರೆಯಲ್ಲಿ ವಿಲೀನ ರಾದರೂ, ಕೆಲವು ಮುಂಚಿನ ವಿಗ್ರಹಾರಾಧನೆಯನ್ನೂ ವಿಶೇಷವಾಗಿ ವೀರಭದ್ರನ ಉಪಾಸನೆಯನ್ನು ಮುಂದು ವರಿಸಿಕೊಂಡು ಬಂದರು. ಬಸವಣ್ಣನವರ ಮತ್ತು ಚನ್ನಬಸವಣ್ಣನವರ ವಚನಗಳಲ್ಲಿ ಒಂದು ಕಡೆ ಮಾತ್ರ ವೀರಭದ್ರನ ಉಲ್ಲೇಖ ಬರುತ್ತದೆ. ವೀರಭದ್ರೇಶ್ವರ ಅಥವಾ ವೀರೇಶ ಅಂಕಿತದ ವಚನಗಳು ಇದ್ದಂತೆ ಕಾಣುವುದಿಲ್ಲ. ಬಸವ ಪುರಾಣದಲ್ಲಿ "ವೀರಾವತಾರರು ವೀರಭದ್ರಾದಿ ಪ್ರಮಥವರರ ಭಾವದಲಿ" ಎಂಬ ಪ್ರಸ್ತಾಪ ಬಂದಿದೆ. ನಂಜುಂಡ ಕವಿ ವೀರಭದ್ರನೇ ಶೂರಶರಣ ಮಡಿವಾಳ ಮಾಚಿದೇವನ ರೂಪದಲ್ಲಿ ಬಂದನೆಂದು ವರ್ಣಿಸಿದ್ದಾನೆ.

ಬನವಾಸಿಯ ಮಧುಕೇಶ್ವರ ದೇವಸ್ಥಾನ ಸಮು ಚ್ಚಯದಲ್ಲಿರುವ ಕ್ರಿ.ಶ. ೧೩೬೯ರಲ್ಲಿ ಸ್ಥಾಪಿತವಾದ

ವೀರಭದ್ರದೇವರ ಗುಡಿ ಚಿಕ್ಕದೇವ ಒಡೆಯನೆಂಬ ಲಕುಲೀಶ ಗುರುವಿಗೆ ಅರ್ಪಿತವಾದ ಬಗ್ಗೆ ಶಾಸನದ ದಾಖಲೆ ಇದೆ. ಬಾಳೆಹೊನ್ನೂರಿನ (ರಂಭಾಪುರಿ) ವೀರ ಶೈವ ವೀರ ಸಿಂಹಾಸನ ಮಠದಲ್ಲಿ ವೀರೇಶನು (ವೀರಭದ್ರನು) ಪೀಠದ ಗೋತ್ರಪುರುಷನಾಗಿಯೇ ಪೂಜೆಗೊಳ್ಳುತ್ತಾನೆ. ಇಲ್ಲಿನ ವೀರಭದ್ರ ದೇವಸ್ಥಾನಕ್ಕೆ ವಿರೂಪಣ್ಣ ಒಡೆಯರ ಮಹಾಪ್ರಧಾನಿ ಮಾದರಸ ಒಡೆಯರು ಭೂದಾನ ಮಾಡಿದ್ದನ್ನು ಕ್ರಿ.ಶ. ೧೩೬೯ರ ಶಾಸನವು ದಾಖಲಿಸಿದೆ. ಇಲ್ಲಿ ವೀರಭದ್ರ ಮತ್ತು ಭದ್ರಕಾಳಿಯರ ಲೋಹದ, ಉತ್ಸವಮೂರ್ತಿಗಳೂ ಇವೆ. ಬೆಂಗಳೂರು ಜಿಲ್ಲೆಯ ಶಿವಗಂಗಾ ಕ್ಷೇತ್ರದ ಮೇಲಣಗವಿ ವೀರಸಿಂಹಾಸನ ಮಠದಲ್ಲೂ ವೀರಭದ್ರನ ಅರ್ಚನೆ ನಡೆಯುತ್ತದೆ. ಹಂಪೆಯಲ್ಲಿ ಮಾತಂಗಪರ್ವತದ ಮೇಲೆ ಸಂಗಮರ ಕಾಲದ ವೀರಭದ್ರ ದೇವಸ್ಥಾನವಲ್ಲದೆ, ತದನಂತರದ ಮುದುವೀರಣ್ಣನ (ಉದ್ದಾನ ವೀರಭದ್ರನ) ಗುಡಿ, ಕಾಮಲಾಪುರದ ರಸ್ತೆಯ ಎಡದ ಗುಡ್ಡದ ಮೇಲೆ ಇನ್ನೊಂದು ವೀರೇಶನ ಗುಡಿ ಉಳಿದಿವೆ. ಬೆಳಗಾವಿ ಜಿಲ್ಲೆಯ ಗೊಡಚಿಯಲ್ಲಿರುವ ವಿಜಯನಗರ ಶೈಲಿಯ ವೀರಭದ್ರ ದೇವಸ್ಥಾನವು ಇಂದಿಗೂ ಬಹಳಷ್ಟು ಭಕ್ತರನ್ನು ಆಕರ್ಷಿಸುತ್ತಿದೆ. ಕೆಳದಿ ನಾಯಕರ ಕಾಲದಲ್ಲಿ ವೀರಭದ್ರಾಪುರದ ಅಗ್ರಹಾರದ ಬ್ರಾಹ್ಮಣರಿಗೆ ವೀರಭದ್ರೇಶ್ವರ, ಹನುಮಂತ ದೇವರು ಮತ್ತು ವಿನಾಯಕ ದೇವರ ಪೂಜೆಗಾಗಿ ವೀರಭದ್ರ ನಾಯಕನು ಕ್ರಿ.ಶ. ೧೬೩೨ರಲ್ಲಿ ಭೂಪತ್ತಿ ಕೊಟ್ಟ ಬಗ್ಗೆ ತಾಮ್ರ ಶಾಸನವಿದೆ. ಬೆಂಗಳೂರು ಜಿಲ್ಲೆಯ ಸಾವನದುರ್ಗದ ಬಳಿ ಮತ್ತು ಬೆಂಗಳೂರಿನ ಗವಿಪುರದಲ್ಲಿ ಭವ್ಯ ವೀರಭದ್ರನ ಮೂರ್ತಿಗಳಿವೆ. ಯಲಹಂಕದ ಪ್ರಭು ಮುಮ್ಮಡಿ ಕೆಂಪೇಗೌಡನ ಕಾಲದಲ್ಲಿ (೧೮ನೆಯ ಶತಮಾನ) 'ವೀರಭದ್ರ ವಿಜಯ' ಎಂಬ ಚಂಪೂ ಕಾವ್ಯದ ರಚನೆಯಾಯಿತು.

ವಿಜಯನಗರವೂ, ಅದರ ಪತನಾ ನಂತರ ಅದಕ್ಕೆ ಉತ್ತರಾಧಿಕಾರಿಯಾದ ಸಣ್ಣ ರಾಜ್ಯಗಳೂ ಆಕ್ರಮಣವನ್ನು ಎದುರಿಸಲು ಸದಾ ಯುದ್ಧಸನ್ನದ್ಧವಾಗಿರಬೇಕಾಗಿತ್ತು ಎಂಬುದನ್ನು ಗಮನಿಸಬೇಕು. ಇಂಥ ಪರಿಸ್ಥಿತಿಯಲ್ಲಿ ಜನರಲ್ಲಿ ವೀರ ಪ್ರತಿಭಟನೆಯ ವಾತಾವರಣವನ್ನು, ಮನೋಭಾವನೆಯನ್ನು ಉಂಟು ಮಾಡಲು ವೀರೇಶನ ಉಪಾಸನೆಯು ವಿಶೇಷವಾಗಿ ಅಗತ್ಯವೆಂದು ಭಾವಿಸಿದ್ದರೆ ಅದಕ್ಕೆ ಇದು ಸಹಾಯಕ ಸಾಧನವಾಗಿ ಪರಿಣಮಿಸಿದ್ದರೆ ಆಶ್ಚರ್ಯವಲ್ಲ. ವೀರಬಣಂಜು ಪರಂಪರೆಯವರು ವಿಜಯನಗರದ ಉಚ್ಛ್ರಾಯದ ಕಾಲದಲ್ಲಿ ವ್ಯಾಪಾರೋದ್ಯಮಗಳಲ್ಲಿ ಹೆಚ್ಚು ಸಾಹಸ ಮಾಡಲೂ ಅವಕಾಶವಾಯಿತು. ಅವರು ತಮ್ಮ ಸರಕುಗಳ ಸಂಗ್ರಹದ ಮತ್ತು ಸಾಗಾಣಿಕೆಯ ರಕ್ಷಣೆಗೆ ತಮ್ಮದೇ ಸೈನಿಕ ಘಟಕಗಳನ್ನು ಇಟ್ಟುಕೊಳ್ಳುವುದು ವಾಡಿಕೆಯಾಗಿತ್ತು. ಆದ್ದರಿಂದ, ಉಗ್ರದೇವತೆ ವೀರಭದ್ರನ ಉಪಾಸನೆಯು ನೆರವು ಅವರಿಗೂ ಪ್ರಯೋಜನಕಾರಿಯಾಗಿರಬೇಕು. ವೀರಭದ್ರನು ಶೌರ್ಯದ, ಹೋರಾಟದ, ಧೈರ್ಯದ, ರಕ್ಷಣೆಯ ಪ್ರತೀಕನಾದ ಆರಾಧ್ಯದೇವತೆಯಾಗಿ ಕರ್ನಾಟಕದಲ್ಲಿ ವಿಸ್ತೃತವಾಗಿ ಕಂಗೊಳಿಸಿದ್ದಾನೆ. ಈ ದೈವತ್ವದ ಉಪಾಸನೆಯಲ್ಲಿ ಅಗ್ನಿ-ಅರ್ಚನೆ (ಕೆಂಡ ಹಾಯುವುದು), ಗುಗ್ಗುಳ ಮುಂತಾದ ತನ್ನದೇ ಆದ ರೀತಿ-ರಿವಾಜುಗಳು ಇವೆ. ಈ ಉಪಾಸನೆಯಿಂದ ಪ್ರಭಾವಿತವಾದ ವೀರಗಾಸೆ, ನಂದೀಧ್ವಜ (ನಂದಿಕೋಲು) ಕುಣಿತಗಳು ಮುಂತಾದ ರೋಮಾಂಚಕ, ವಿಶಿಷ್ಟ ಜಾನಪದ ಕಲೆಗಳೂ ಪ್ರಚಲಿತವಾಗಿವೆ. ವೀರೇಶ, ವೀರಪ್ಪ, ವೀರಯ್ಯ, ವೀರಣ್ಣ, ಭದ್ರಯ್ಯ, ಭದ್ರಪ್ಪ ಇಂತಹ ವಿಪುಲವಾದ ವ್ಯಕ್ತಿನಾಮಗಳು ವೀರಭದ್ರನ ಉಪಾಸನೆಯಿಂದ ಬಂದಿವೆ. ಬಹಳಷ್ಟು ಕುಟುಂಬಗಳು ತಾವು ವೀರಭದ್ರ ದೇವರ 'ಒಕ್ಕಲು' (ಉಪಾಸಕರು) ಎಂದು ಹೆಮ್ಮೆಯಿಂದ ಹೇಳಿಕೊಳ್ಳುವುದೂ ಒಂದು ವೀರ ಪರಂಪರೆಯ ದ್ಯೋತಕವೇ. ○

## ಕೆಲವು ಸಹಾಯಕ ಗ್ರಂಥಗಳು


1 Mysore Archaeological Reports of relevant years
2 Karanataka District Gazetteers

3 South Indian Images of Gods and Goddesses – H. Krishna Sastri
4 Iconography of Hindus, Buddhists and Jains—R.S. Gupte
5 Elements of Hindu Iconography—T.A. GopinathaRao
6 ಮೂರ್ತಿಶಿಲ್ಪ, ನೆಲೆ, ಹಿನ್ನೆಲೆ – ಎಸ್. ಕೆ. ರಾಮಚಂದ್ರರಾವ್
7 ಚಿಗುರಿಟ್ಟ ಚಿಂತನ – ಡಾ॥ ಶ್ರೀ ಜ.ಚ.ನಿ.
8 ರುದ್ರ, ಭದ್ರ, ರೇಣುಕ – ಡಾ॥ ಶ್ರೀ ಜ.ಚ.ನಿ.
9 ಮಾಮಿಡಿ ಮಾಸಿಕ—ಭದ್ರಾಂಕ I ಮತ್ತು II (ಅಕ್ಟೋಬರ್ ೧೯೮೫ ಮತ್ತು ಜನವರಿ ೧೯೮೬) – ಸಂ. ಎಂ.ಜಿ. ನಾಗರಾಜ್
10 ಶ್ರೀ ವೀರೇಶ ಷಡ್ಲೀಲಾದರ್ಶನ—ಎಂ. ಚಂದ್ರಶೇಖರ ಆರಾಧ್ಯ